# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1915

ವಿಧಾನ ಪರಿಷತ್ತು ಸದಸ್ಯರ ಹೆಸರು : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 23.03.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಕಾರವಾರ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ಜನ ವಸತಿ ಪ್ರದೇಶದಿಂದ ದೂರ ಇರುವ ಗ್ರಾಮೀಣ ತಾಂಡ ಪ್ರದೇಶಗಳಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಉದ್ದೇಶಿಸಲಾಗಿದೆಯೇ; ಹಾಗಿದ್ದಲ್ಲಿ, ಎಷ್ಟು ತಾಂಡ ಪ್ರದೇಶಗಳನ್ನು ಗುರುತಿಸಲಾಗಿದೆ;<br>(ತಾಲ್ಲೂಕುವಾರು/ಜಿಲ್ಲಾವಾರು ವಿವರ ನೀಡುವುದು)</td><td>ಹೌದು. ಉತ್ತರ ಕನ್ನಡ ಜಿಲ್ಲೆಯ ಈ ಕೆಳಕಂಡ 7 ತಾಂಡಾ ಪ್ರದೇಶಗಳನ್ನು ನ್ಯಾಯಬೆಲೆ ಅಂಗಡಿ ತೆರೆಯಲು ಗುರುತಿಸಲಾಗಿದೆ.
<table>
<tr><th>ಕ್ರ.ಸಂ</th><th>ಜಿಲ್ಲೆ</th><th>ತಾಲ್ಲೂಕು</th><th>ಗ್ರಾಮ</th></tr>
<tr><td>1</td><td rowspan="2">ಉತ್ತರ ಕನ್ನಡ</td><td>ಮುಂಡಗೋಡ</td><td>1.ಮುಂಡಗೋಡ ಲಂಬಾಣಿ ತಾಂಡಾ<br>2. ಅರಿಶಿಣಗೇರಿ ತಾಂಡಾ<br>3. ಅಗಡಿ ತಾಂಡಾ<br>4.ಕರಗಿನ ಕೊಪ್ಪ ತಾಂಡಾ<br>5. ತೆಗ್ಗಿನ ಕೊಪ್ಪ ತಾಂಡಾ<br>6.ತಮ್ಮ್ಯಾನಕೊಪ್ಪ ತಾಂಡಾ</td></tr>
<tr><td>2</td><td>ಹಳಿಯಾಳ</td><td>7. ಅಜಮನಾಳ ತಾಂಡಾ</td></tr>
</table></td></tr>
<tr><td>ಆ</td><td>ಈ ರೀತಿ ತಾಂಡ ಪ್ರದೇಶಗಳಲ್ಲಿ ಪರವಾನಿಗೆ ನೀಡುವ ಒಂದು ನ್ಯಾಯಬೆಲೆ ಅಂಗಡಿಗೆ ಎಷ್ಟು ರೇಷನ್ ಕಾರ್ಡ್‌ಗಳಿಗೆ ಆಹಾರ ಧಾನ್ಯ ಒದಗಿಸಲು ಅವಕಾಶ ಕಲ್ಪಿಸಲಾಗುವುದು;</td><td>ತಾಂಡಾ ಪ್ರದೇಶಗಳಲ್ಲಿ 100 ಕ್ಕಿಂತ ಹೆಚ್ಚು ಪಡಿತರ ಚೀಟಿ ಹೊಂದಿರುವ ಪ್ರದೇಶದಲ್ಲಿ ನ್ಯಾಯಬೆಲೆ ಅಂಗಡಿ ತೆರೆದು ಆಹಾರಧಾನ್ಯ ಒದಗಿಸಲು ಅವಕಾಶ ಕಲ್ಪಿಸಲಾಗುವುದು .</td></tr>
<tr><td>ಇ</td><td>ಈ ತಾಂಡ ಪ್ರದೇಶಗಳಲ್ಲಿ ಪರವಾನಿಗೆ ಪಡೆಯಲು ಇರುವ ವಿಶೇಷ ಮಾನದಂಡಗಳೇನು? (ಸಂಪೂರ್ಣ ವಿವರ ನೀಡುವುದು)</td><td>ಹೊಸ ನ್ಯಾಯಬೆಲೆ ಅಂಗಡಿ ಮಂಜೂರಾತಿಗೆ ಸಂಬಂಧಪಟ್ಟಂತೆ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ ಕಲಂ 11 ರಂತೆ ಗ್ರಾಮಾಂತರ ಪ್ರದೇಶಗಳಲ್ಲಿ 500 ಪಡಿತರ ಚೀಟಿಗಳನ್ನು ನಿಯೋಜಿಸಿ ಹೊಸ ನ್ಯಾಯಬೆಲೆ ಅಂಗಡಿ ಮಂಜೂರು ಮಾಡಬಹುದು.ಬುಡಕಟ್ಟು ಹಾಡಿಗಳು/ ತಾಂಡಗಳು/ಗೊಲ್ಲರಹಟ್ಟಿ ಇತ್ಯಾದಿಗಳಂತಹ ವಿಶೇಷ ಪ್ರದೇಶಗಳ ಅಗತ್ಯತೆಯನ್ನು ಪೂರೈಸಲು ಅಂತಹ ಗ್ರಾಮೀಣ ಪ್ರದೇಶದ ನ್ಯಾಯಬೆಲೆ ಅಂಗಡಿಗೆ ಪಡಿತರ ಚೀಟಿಗಳ ಪರಿಮಿತಿಯನ್ನು 100 ಪಡಿತರ ಚೀಟಿಗಳವರೆಗೆ ವಿನಾಯಿತಿಗೊಳಿಸಬಹುದಾಗಿರುತ್ತದೆ.</td></tr>
</table>

ಆನಾಸ 30 ಆನಾಸ 2021 (ಇ-ಆಫೀಸ್)

(ಉಮೇಶ ವಿ. ಕತ್ತಿ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ